





**(ಅವತೀರ್ಣ - ಮಕ್ಕಾದಲ್ಲಿ)**

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ

1-6. ಒಂದರ ಹಿಂದೆ ಒಂದರಂತೆ ಕಳುಹಿಸಲ್ಪಡುವ (ಮಾರುತ), ಬಳಿಕ ಬಿರುಗಾಳಿಯ ವೇಗದಲ್ಲಿ ಬೀಸುವ ಮತ್ತು (ಮೋಡಗಳನ್ನು) ಎತ್ತಿಕೊಂಡು ಹರಡುವ, ಬಳಿಕ (ಅವುಗಳನ್ನು) ಸೀಳಿ ಬೇರ್ಪಡಿಸುವ- ಆಗ ನೆಪದ ರೂಪದಲ್ಲಾಗಲಿ ಅಥವಾ ಎಚ್ಚರಿಕೆಯ ರೂಪದಲ್ಲಾಗಲಿ (ಹೃದಯಗಳಲ್ಲಿ ದೇವ) ಸ್ಮರಣೆಯನ್ನು ಮೂಡಿಸುವವುಗಳಾಣೆ![1]

وَالْمُرْسَلٰتِ عُرْفًا ﴿١﴾ فَالْعٰصِفٰتِ عَصْفًا ﴿٢﴾ وَّالنّٰشِرٰتِ نَشْرًا ﴿٣﴾ فَالْفٰرِقٰتِ فَرْقًا ﴿٤﴾ فَالْمُلْقِيٰتِ ذِكْرًا ﴿٥﴾ عُذْرًا اَوْ نُذْرًا ﴿٦﴾

7. ನಿಮಗೆ ವಾಗ್ದಾನ ಮಾಡಲಾಗುತ್ತಿರುವ ಘಟನೆಯು ಖಂಡಿತವಾಗಿಯೂ ಸಂಭವಿಸಲಿದೆ.[2]

اِنَّمَا تُوْعَدُوْنَ لَوَاقِعٌ ﴿٧﴾

8. ಇನ್ನು- ನಕ್ಷತ್ರಗಳು ಕಳೆಗುಂದಿ ಹೋಗುವಾಗ-

فَاِذَا النُّجُوْمُ طُمِسَتْ ﴿٨﴾

9. ಮತ್ತು ಆಕಾಶವು ಸೀಳಲ್ಪಡುವಾಗ-

وَاِذَا السَّمَآءُ فُرِجَتْ ﴿٩﴾

10. ಮತ್ತು ಪರ್ವತಗಳು ಹಿಂಜಲ್ಪಡುವಾಗ-

وَاِذَا الْجِبَالُ نُسِفَتْ ﴿١٠﴾

11. ಮತ್ತು ಪ್ರವಾದಿಗಳು ಹಾಜರಾಗುವ ಸಮಯ ಸನ್ನಿಹಿತವಾಗುವಾಗ[3] (ಆ ದಿನ ಆ ಘಟನೆ ಸಂಭವಿಸಿ ಬಿಡುವುದು)

وَاِذَا الرُّسُلُ اُقِّتَتْ ﴿١١﴾

1. ಅರ್ಥಾತ್- ಕೆಲವೊಮ್ಮೆ ಅವುಗಳ ಬರುವಿಕೆ ನಿಂತು ಕ್ಷಾಮದ ಅಪಾಯ ತಲೆದೋರಿದಾಗ ಮನಸ್ಸು ಮೃದುವಾಗುತ್ತದೆ. ಜನರು ಅಲ್ಲಾಹನೊಡನೆ ಕ್ಷಮಾಯಾಚನೆ ಮಾಡತೊಡಗುತ್ತಾರೆ. ಕೆಲವೊಮ್ಮೆ ಅವು ಕೃಪಾವೃಷ್ಟಿ ತಂದಾಗ ಜನರು ಅಲ್ಲಾಹನನ್ನು ಸ್ತುತಿಸುತ್ತಾರೆ. ಕೆಲವೊಮ್ಮೆ ಅವು ಚಂಡಮಾರುತದ ಭೀಕರ ರೂಪ ತಾಳಿದಾಗ ಮನಸ್ಸಿನಲ್ಲಿ ಭಯ ಆವರಿಸುತ್ತದೆ. ವಿನಾಶದ ಭಯದಿಂದ ಜನರು ದೇವನತ್ತ ತಿರುಗುತ್ತಾರೆ.
2. ಅರ್ಥಾತ್- ಮಾರುತಗಳ ಈ ವ್ಯವಸ್ಥೆ ಪುನರುತ್ಥಾನವಂತೂ ಒಂದು ದಿನ ಬಂದೇ ತೀರುವುದು ಎಂಬುದರ ಸಾಕ್ಷ್ಯ ವಹಿಸುತ್ತದೆ. ಗಾಳಿಯು, ಸೃಷ್ಟಿಗಳ ಬದುಕಿನ ಅತ್ಯಂತ ಪ್ರಮುಖ ಆಧಾರವಾಗಿದೆ. ಆದರೆ ಅಲ್ಲಾಹನು ತಾನಿಚ್ಛಿಸಿದಾಗ ಅದನ್ನು ವಿನಾಶ ಸಾಧನವನ್ನಾಗಿ ಮಾಡುತ್ತಾನೆ ಮತ್ತು ಮಾಡಿದ್ದಾನೆ.
3. ಹಶ್ರ್‌ನ ಮೈದಾನದಲ್ಲಿ ಸಮಸ್ತ ಮಾನವಕುಲದ ವಿಚಾರಣೆ ನಡೆಯುವಾಗ ಪ್ರತಿಯೊಂದು ಸಮುದಾಯದ ಪ್ರವಾದಿಯನ್ನು ಸಾಕ್ಷ್ಯ

| | |
|---|---|
| 12. ಈ ಕಾರ್ಯವನ್ನು ಯಾವ ದಿನಕ್ಕಾಗಿ ಮುಂದೂಡಲಾಗಿದೆ? | لِاَیِّ یَوۡمٍ اُجِّلَتۡ ؕ ١٢ |
| 13. ತೀರ್ಮಾನದ ದಿನಕ್ಕಾಗಿ. | لِیَوۡمِ الۡفَصۡلِ ۚ ١٣ |
| 14. ಆ ತೀರ್ಮಾನದ ದಿನವೇನೆಂಬುದು ನಿಮಗೇನು ಗೊತ್ತು? | وَ مَاۤ اَدۡرٰىكَ مَا یَوۡمُ الۡفَصۡلِ ؕ ١٤ |
| 15. ಅಂದು, ಸುಳ್ಳಾಗಿಸುವವರಿಗೆ ವಿನಾಶವಿದೆ. | وَیۡلٌ یَّوۡمَئِذٍ لِّلۡمُكَذِّبِیۡنَ ١٥ |
| 16. ನಾವು ಹಿಂದಿನವರನ್ನು ನಾಶಗೊಳಿಸಲಿಲ್ಲವೇ? | اَلَمۡ نُهۡلِكِ الۡاَوَّلِیۡنَ ؕ ١٦ |
| 17. ಆ ಬಳಿಕ ಅನಂತರದವರನ್ನೂ ನಾವು ಅದರ ಹಿಂದೆಯೇ ಕಳುಹಿಸುವೆವು. | ثُمَّ نُتۡبِعُهُمُ الۡاٰخِرِیۡنَ ١٧ |
| 18. ನಾವು ಅಪರಾಧಿಗಳೊಂದಿಗೆ ಹೀಗೆಯೇ ವ್ಯವಹರಿಸುತ್ತೇವೆ. | كَذٰلِكَ نَفۡعَلُ بِالۡمُجۡرِمِیۡنَ ١٨ |
| 19. ಅಂದು ಸುಳ್ಳಾಗಿಸುವವರಿಗೆ ವಿನಾಶವಿದೆ.[4] | وَیۡلٌ یَّوۡمَئِذٍ لِّلۡمُكَذِّبِیۡنَ ١٩ |
| 20. ನಾವು ನಿಮ್ಮನ್ನು ಒಂದು ತುಚ್ಛ ದ್ರವದಿಂದ ಸೃಷ್ಟಿಸಲಿಲ್ಲವೇ? | اَلَمۡ نَخۡلُقۡكُّمۡ مِّنۡ مَّآءٍ مَّهِیۡنٍ ۙ ٢٠ |
| 21. ಮತ್ತು ಅದನ್ನು ಒಂದು ಸುರಕ್ಷಿತ ಸ್ಥಳದಲ್ಲಿರಿಸಲಿಲ್ಲವೇ? | فَجَعَلۡنٰهُ فِیۡ قَرَارٍ مَّكِیۡنٍ ۙ ٢١ |
| 22. ಒಂದು ನಿಶ್ಚಿತ ಕಾಲಾವಧಿವರೆಗೆ- | اِلٰی قَدَرٍ مَّعۡلُوۡمٍ ۙ ٢٢ |
| 23. ನೋಡಿರಿ, ನಾವು ಹಾಗೆ ಮಾಡಲು ಸಮರ್ಥರಾಗಿದ್ದೆವು. ಆದುದರಿಂದ ನಾವು ಅತ್ಯುತ್ತಮ ಸಾಮರ್ಥ್ಯವುಳ್ಳವರಾಗಿದ್ದೇವೆ. | فَقَدَرۡنَا ۖ فَنِعۡمَ الۡقٰدِرُوۡنَ ٢٣ |
| 24. ಅಂದು ಸುಳ್ಳಾಗಿಸುವವರಿಗೆ ವಿನಾಶವಿದೆ.[5] | وَیۡلٌ یَّوۡمَئِذٍ لِّلۡمُكَذِّبِیۡنَ ٢٤ |
| 25. ನಾವು ಭೂಮಿಯನ್ನು ಶೇಖರಿಸಿಡುವಂತಹದ್ದಾಗಿ ಮಾಡಲಿಲ್ಲವೇ? | اَلَمۡ نَجۡعَلِ الۡاَرۡضَ كِفَاتًا ۙ ٢٥ |

ವಹಿಸಲು ಮುಂದೆ ತರಲಾಗುವುದು. ಅವರು ತಾನು ಅಲ್ಲಾಹನ ಸಂದೇಶವನ್ನು ಜನರಿಗೆ ತಲಪಿಸಿದ್ದೇನೆ ಎಂಬುದರ ಸಾಕ್ಷ್ಯ ವಹಿಸಬೇಕಾಗುವುದು. ಪವಿತ್ರ ಕುರ್‌ಆನಿನಲ್ಲಿ ಈ ವಿಷಯವನ್ನು ಅನೇಕ ಕಡೆ ಪ್ರಸ್ತಾಪಿಸಲಾಗಿದೆ.

4. ಲೋಕದಲ್ಲಿ ಅವರು ಯಾವ ಪರಿಣಾಮವನ್ನು ಎದುರಿಸಿದ್ದಾರೋ ಅಥವಾ ಎದುರಿಸಲಿದ್ದಾರೋ ಅದು ಅವರ ನಿಜವಾದ ಶಿಕ್ಷೆಯಲ್ಲ. ನಿಜವಾದ ಶಿಕ್ಷೆ ಅವರಿಗೆ ಫಲಿತಾಂಶದ ಆ ದಿನದಂದು ಎರಗುವುದು ಎಂದು ಹೇಳುವುದು ಇಲ್ಲಿ ಈ ವಿಷಯವನ್ನು ಪ್ರಸ್ತಾಪಿಸಲಾಗಿರುವುದರ ಉದ್ದೇಶವಾಗಿದೆ.

5. ಅರ್ಥಾತ್- ಮರಣೋತ್ತರ ಜೀವನದ ಈ ಸುಸ್ಪಷ್ಟ ಸಾಕ್ಷಿ ಮುಂದಿರುವಾಗಲೂ ಇಂದು ಅದನ್ನು ನಿರಾಕರಿಸುತ್ತಿರುವ ಜನರು ಆ ದಿನ ವಿನಾಶಕ್ಕೀಡಾಗುವರು.

| | |
|---|---|
| 26. ಜೀವಂತವಿರುವವರಿಗಾಗಿಯೂ ಮೃತರಿಗಾಗಿಯೂ | أَحْيَاءً وَّ أَمْوَاتًا ٢٦ |
| 27. ಮತ್ತು ಅದರಲ್ಲಿ ಉನ್ನತೋನ್ನತ ಪರ್ವತಗಳನ್ನು ಸ್ಥಿರವಾಗಿರಿಸ ಲಿಲ್ಲವೇ? ಮತ್ತು ನಿಮಗೆ ಸಿಹಿ ನೀರನ್ನು ಕುಡಿಸಲಿಲ್ಲವೇ? | وَّجَعَلْنَا فِيهَا رَوَاسِيَ شٰمِخٰتٍ وَّ أَسْقَيْنٰكُمْ مَّاءً فُرَاتًا ٢٧ |
| 28. ಅಂದು ಸುಳ್ಳಾಗಿಸುವವರಿಗೆ ವಿನಾಶವಿದೆ.[6] | وَيْلٌ يَّوْمَئِذٍ لِّلْمُكَذِّبِينَ ٢٨ |
| 29. [7]ಈಗ, ನೀವು ಯಾವುದನ್ನು ಸುಳ್ಳೆಂದು ಹೇಳುತ್ತಿದ್ದಿರೋ ಅದರೆಡೆಗೇ ನಡೆಯಿರಿ- | اِنْطَلِقُوْٓا اِلٰى مَا كُنْتُمْ بِهٖ تُكَذِّبُوْنَ ٢٩ |
| 30. ಮೂರು ಕವಲುಗಳುಳ್ಳ ನೆರಳಿನ ಕಡೆಗೆ ನಡೆಯಿರಿ-[8] | اِنْطَلِقُوْٓا اِلٰى ظِلٍّ ذِيْ ثَلٰثِ شُعَبٍ ٣٠ |
| 31. (ಅದು) ತಂಪೊದಗಿಸುವಂತಹದೂ ಅಲ್ಲ, ಅಗ್ನಿ ಜ್ವಾಲೆಯಿಂದ ರಕ್ಷಿಸುವಂತಹದೂ ಅಲ್ಲ. | لَّا ظَلِيْلٍ وَّ لَا يُغْنِيْ مِنَ اللَّهَبِ ٣١ |
| 32. ಆ ಬೆಂಕಿಯು ದೊಡ್ಡ ದೊಡ್ಡ ಭವನದಂತಹ ಕಿಡಿಗಳನ್ನು ಉಗುಳುವುದು. | اِنَّهَا تَرْمِيْ بِشَرَرٍ كَالْقَصْرِ ٣٢ |
| 33. ಅವು (ಜಿಗಿಯುತ್ತಿರುವ) ಹಳದಿ ಒಂಟೆಗಳೋ ಎಂಬಂತಿರುವುವು. | كَاَنَّهٗ جِمٰلَتٌ صُفْرٌ ٣٣ |
| 34. ಅಂದು ಸುಳ್ಳಾಗಿಸುವವರಿಗೆ ವಿನಾಶವಿದೆ. | وَيْلٌ يَّوْمَئِذٍ لِّلْمُكَذِّبِينَ ٣٤ |
| 35. ಅದು, ಅವರೇನೂ ಮಾತನಾಡದ ದಿನವಾಗಿರುವುದು- | هٰذَا يَوْمُ لَا يَنْطِقُوْنَ ٣٥ |
| 36. ಮತ್ತು ಅವರಿಗೆ ಅಂದು ನೆಪಗಳನ್ನೊಡ್ಡುವ ಅನುಮತಿಯನ್ನೂ ನೀಡಲಾಗದು.[9] | وَلَا يُؤْذَنُ لَهُمْ فَيَعْتَذِرُوْنَ ٣٦ |
| 37. ಅಂದು ಸುಳ್ಳಾಗಿಸುವವರಿಗೆ ವಿನಾಶವಿದೆ. | وَيْلٌ يَّوْمَئِذٍ لِّلْمُكَذِّبِينَ ٣٧ |

6. ಅರ್ಥಾತ್- ಯಾರು ದೇವನ ಯುಕ್ತಿ ಮತ್ತು ಮಹಿಮೆಗಳ ಈ ಚಮತ್ಕಾರಗಳನ್ನು ನೋಡಿದ ನಂತರವೂ ಪರಲೋಕದ ಸಾಧ್ಯತೆ ಮತ್ತು ಸತ್ಯತೆಯನ್ನು ನಿರಾಕರಿಸುತ್ತಾರೋ ಅವರು ಅದೇ ರೀತಿಯ ಭ್ರಮೆಯಲ್ಲಿರಬಯಸಿದರೆ ಇದ್ದು ಬಿಡಲಿ. ಎಲ್ಲವೂ ಅವರ ನಿರೀಕ್ಷೆಗೆ ವಿರುದ್ಧವಾಗಿ ನಡೆಯುವ ಆ ದಿನ, ನಮ್ಮ ಮೂರ್ಖತನದ ಮೂಲಕ ನಾವು ನಮಗೇ ನಷ್ಟ ಉಂಟು ಮಾಡಿದೆವು ಎಂದು ಅವರಿಗೆ ತಿಳಿದುಬರುವುದು.
7. ಪರಲೋಕಕ್ಕೆ ಆಧಾರಗಳನ್ನು ನೀಡಲಾದ ನಂತರ, ಈಗ ಆ ದಿನ ಬಂದು ಬಿಟ್ಟಾಗ ನಿಷೇಧಿಗಳು ಯಾವ ಪರಿಣಾಮವನ್ನೆದುರಿಸುವರು ಎಂದು ಹೇಳಲಾಗುತ್ತಿದೆ.
8. ನೆರಳು ಎಂದರೆ ಹೊಗೆಯ ನೆರಳಾಗಿದೆ. ದೊಡ್ಡ ಪ್ರಮಾಣದಲ್ಲಿ ಹೊಗೆಯೆದ್ದಾಗ ಅದು ಮೇಲೆ ಹೋಗಿ ಅನೇಕ ಶಾಖೆಗಳಲ್ಲಿ ವಿಭಜನೆಯಾಗುತ್ತದೆ. ಇದನ್ನೇ ಇಲ್ಲಿ ಮೂರು ಶಾಖೆಗಳು ಎಂದು ಹೇಳಲಾಗಿದೆ.
9. ಅರ್ಥಾತ್- ಅವರ ವಿರುದ್ಧ ಎಷ್ಟು ಪ್ರಬಲವಾದ ಆಧಾರ ಪ್ರಮಾಣಗಳೊಂದಿಗೆ ಮೊಕದ್ದಮೆಯನ್ನು ಸಾಬೀತು ಪಡಿಸಲಾಗುವುದೆಂದರೆ ಅವರು ಸ್ತಂಭೀಭೂತರಾಗಿ ಬಿಡುವರು. ಅವರಿಗೆ ತಮ್ಮ ಪರವಾಗಿ ಯಾವುದೇ ಸಬೂಬು ಹೇಳುವ ಅವಕಾಶವೇ ದೊರೆಯಲಾರದು.

38. ಇದು ತೀರ್ಪಿನ ದಿನ. ನಾವು ನಿಮ್ಮನ್ನೂ ನಿಮ್ಮ ಪೂರ್ವಜರನ್ನೂ ಒಟ್ಟುಗೂಡಿಸಿ ಬಿಟ್ಟಿದ್ದೇವೆ.

هٰذَا يَوْمُ الْفَصْلِ جَمَعْنٰكُمْ وَالْاَوَّلِيْنَ ﴿٣٨﴾

39. ಈಗ ನಿಮಗೆ ಸಾಧ್ಯವಿದ್ದರೆ ನನ್ನ ವಿರುದ್ಧ ಏನಾದರೂ ಕುತಂತ್ರ ನಡೆಸಿ ನೋಡಿರಿ.

فَاِنْ كَانَ لَكُمْ كَيْدٌ فَكِيْدُوْنِ ﴿٣٩﴾

40. ಅಂದು ಸುಳ್ಳಾಗಿಸುವವರಿಗೆ ವಿನಾಶವಿದೆ.

وَيْلٌ يَّوْمَئِذٍ لِّلْمُكَذِّبِيْنَ ﴿٤٠﴾

41. ಧರ್ಮನಿಷ್ಠರು ಇಂದು ನೆರಳುಗಳಲ್ಲೂ ಚಿಲುಮೆಗಳಲ್ಲೂ ಇದ್ದಾರೆ-

اِنَّ الْمُتَّقِيْنَ فِيْ ظِلٰلٍ وَّعُيُوْنٍ ﴿٤١﴾

42. ಮತ್ತು ಅವರು ಇಷ್ಟಪಡುವ ಫಲಗಳು(ಅವರಿಗಾಗಿ ಸಿದ್ಧವಾಗಿವೆ).

وَّفَوَاكِهَ مِمَّا يَشْتَهُوْنَ ﴿٤٢﴾

43. ನೀವು ಮಾಡುತ್ತಿದ್ದ ಕರ್ಮಗಳ ಪ್ರತಿಫಲವಾಗಿ ಸಂತೋಷದಿಂದ ತಿನ್ನಿರಿ ಮತ್ತು ಕುಡಿಯಿರಿ.

كُلُوْا وَاشْرَبُوْا هَنِيْٓـًٔا بِمَا كُنْتُمْ تَعْمَلُوْنَ ﴿٤٣﴾

44. ನಾವು ಸಜ್ಜನರಿಗೆ ಇಂತಹದೇ ಸತ್ಫಲವನ್ನು ನೀಡುತ್ತೇವೆ.

اِنَّا كَذٰلِكَ نَجْزِي الْمُحْسِنِيْنَ ﴿٤٤﴾

45. ಅಂದು ಸುಳ್ಳಾಗಿಸುವವರಿಗೆ ವಿನಾಶವಿದೆ.

وَيْلٌ يَّوْمَئِذٍ لِّلْمُكَذِّبِيْنَ ﴿٤٥﴾

46. ತಿನ್ನಿರಿ ಮತ್ತು ಅನುಭೋಗಿಸಿರಿ[10]- ಕೆಲವು ದಿನ ಮಾತ್ರ. ವಾಸ್ತವದಲ್ಲಿ ನೀವು ಅಪರಾಧಿಗಳಾಗಿದ್ದೀರಿ.

كُلُوْا وَتَمَتَّعُوْا قَلِيْلًا اِنَّكُمْ مُّجْرِمُوْنَ ﴿٤٦﴾

47. ಅಂದು ಸುಳ್ಳಾಗಿಸುವವರಿಗೆ ವಿನಾಶವಿದೆ.

وَيْلٌ يَّوْمَئِذٍ لِّلْمُكَذِّبِيْنَ ﴿٤٧﴾

48. ಇವರೊಡನೆ (ಅಲ್ಲಾಹನ ಮುಂದೆ) ತಲೆಬಾಗಿರಿ ಎಂದಾಗ ಇವರು ತಲೆಬಾಗುವುದಿಲ್ಲ.

وَاِذَا قِيْلَ لَهُمُ ارْكَعُوْا لَا يَرْكَعُوْنَ ﴿٤٨﴾

49. ಅಂದು ಸುಳ್ಳಾಗಿಸುವವರಿಗೆ ವಿನಾಶವಿದೆ.

وَيْلٌ يَّوْمَئِذٍ لِّلْمُكَذِّبِيْنَ ﴿٤٩﴾

50. ಇನ್ನು ಇದರ (ಕುರ್‌ಆನಿನ) ಅನಂತರ ಇನ್ನಾವ ವಚನದ ಮೇಲೆ ತಾನೇ ಇವರು ವಿಶ್ವಾಸವಿರಿಸುವರು?

فَبِاَيِّ حَدِيْثٍۭ بَعْدَهٗ يُؤْمِنُوْنَ ﴿٥٠﴾

---

10. ಮಾತನ್ನು ಕೊನೆಗೊಳಿಸುತ್ತಾ, ಮಕ್ಕಾದ ಸತ್ಯನಿಷೇಧಿಗಳನ್ನಷ್ಟೇ ಅಲ್ಲದೆ ವಿಶ್ವದ ಸಮಸ್ತ ಸತ್ಯನಿಷೇಧಿಗಳನ್ನು ಉದ್ದೇಶಿಸಿ ಈ ಮಾತು ಹೇಳಲಾಗುತ್ತಿದೆ.